ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ನಂ. ಆ.ಇ. 116 ವೆಚ್ಚ–7/2008, ದಿನಾಂಕ 11–2–2008ರ ಸಹಮತಿಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 353

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಮತ್ತು ಕಾಫಿಪೋಸಾ ಮತ್ತು ಅಭಿಯೋಗ)

**ವಿಷಯ :** ಶ್ರೀ ಜಿ.ವಿ. ಕೃಷ್ಣಾರೆಡ್ಡಿ, ಸರ್ಕಾರಿ ಅಭಿಯೋಜಕರು, ಮಂಡ್ಯ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರ ಸೌಲಭ್ಯವನ್ನು ಪ್ರಕಾರ ಅರ್ಹತಾದಾಯಕ ಸೇವೆಗೆ ಹೆಚ್ಚಿನ ಸೇವೆ ಸೇರ್ಪಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ನಂ. ಲಾ 67 ಪಿಪಿಇ 82, ದಿನಾಂಕ 12–7–1982.
2. ಸರ್ಕಾರದ ಪತ್ರ ನಂ. ಲಾ 66 ಪಿಪಿಇ 83, ದಿನಾಂಕ 22/22–6–1983.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 23–8–2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಲೆಕ್ಕ–1/185/2007–08, ದಿನಾಂಕ 29–11–2007.

**ಪ್ರಸ್ತಾವನೆ :**

ಶ್ರೀ ಜಿ.ವಿ. ಕೃಷ್ಣಾರೆಡ್ಡಿ, ಸರ್ಕಾರಿ ಅಭಿಯೋಜಕರು, ಮಂಡ್ಯ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ 12–7–1982ರ ಕ್ರ.ಸಂ. 3ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ 30–7–1982ರಂದು ಪೂರ್ವಾಹ್ನದಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಸಿ.ಜೆ.ಎಂ. ನ್ಯಾಯಾಲಯ, ಮಂಡ್ಯ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 8–12–1949 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ದೃಢೀಕರಿಸಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 8–12–1949 ಆಗಿದ್ದು, ಅವರು ದಿನಾಂಕ 30–7–1982ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರು 32 ವರ್ಷ 07 ತಿಂಗಳು 22 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗುತ್ತದೆ. ಆದುದರಿಂದ ಕೆ.ಸಿ.ಎಸ್.ಆರ್. ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಜಿ.ವಿ. ಕೃಷ್ಣಾರೆಡ್ಡಿ, ಸರ್ಕಾರಿ ಅಭಿಯೋಜಕರು, ಮಂಡ್ಯ ಇವರು ದಿನಾಂಕ 30–7–1982ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ 8–12–1949 ಆಗಿದ್ದು, ಇವರು 32 ವರ್ಷ 07 ತಿಂಗಳು 22 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಕೆ.ಸಿ.ಎಸ್.ಆರ್. ನಿಯಮ 247(ಎ)(1) ನಿಯಮದ ಪ್ರಕಾರ ಎರಡು ವರ್ಷ ಸೇವೆಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 420 ಪಿಪಿಇ 2007, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2008.**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಶ್ರೀ ಜಿ.ವಿ. ಕೃಷ್ಣಾರೆಡ್ಡಿ, ಸರ್ಕಾರಿ ಅಭಿಯೋಜಕರು, ಮಂಡ್ಯ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಿವೃತ್ತಿ ವೇತನ ಸೌಲಭ್ಯಗಳಿಗೆ ಮಾತ್ರ ಎರಡು ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ನಂ. ಆ.ಇ. 115 ವೆಚ್ಚ–7/2008, ದಿನಾಂಕ 12–2–2008ರ ಸಹಮತಿಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 354

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗ)

**ವಿಷಯ :** ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ದಾವಣಗೆರೆ ಇವರಿಗೆ ಆಯ್ಕೆಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ನಂ. ಲಾ 225 ಪಿಪಿಇ 91, ದಿನಾಂಕ 10–6–1994.

2. ಸರ್ಕಾರದ ಆದೇಶ ನಂ. ಲಾ 65(19) ಪಿಪಿಇ 97, ದಿನಾಂಕ 24–6–1997.

3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಸಿಶಾ–1/71/2005–06, ದಿನಾಂಕ 24–5–2006.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 10–6–1994ರ ಸರ್ಕಾರದ ಅಧಿಸೂಚನೆ ಕ್ರ.ಸಂ. 96ರನ್ವಯ ಶ್ರೀ ಎಸ್.ವಿ. ಪಾಟೀಲ್, ಇವರು ನೇರ ನೇಮಕಾತಿ ಮೂಲಕ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕವಾಗಿ ದಿನಾಂಕ 10–6–1994ರ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ 24–6–1997ರ ಸರ್ಕಾರದ ಆದೇಶದಲ್ಲಿ ದಿನಾಂಕ 24–6–1996ರಿಂದ ಜಾರಿಗೆ ಬರುವಂತೆ ಅವರ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವೆಂದು ಘೋಷಿಸಲಾಗಿದೆ.

ಸದರಿಯವರು ಹುದ್ದೆಯಲ್ಲಿ ದಿನಾಂಕ 10–6–1994ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಸದರಿ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಇಲ್ಲದೆ ದಿನಾಂಕ 10–6–2004ಕ್ಕೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುತ್ತಾರೆ. ಇವರು ದಿನಾಂಕ 10–6–1994ರಿಂದ ದಿನಾಂಕ 10–6–2004ರ ಸೇವಾ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ/ವೇತನ ರಹಿತ ರಜೆಯನ್ನು ಉಪಯೋಗಿಸಿಕೊಂಡಿರುವುದಿಲ್ಲ ಹಾಗೂ ನಿರಂತರ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುತ್ತಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ/ತನಿಖೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ.

ಸದರಿ ಅಧಿಕಾರಿಯವರಿಗೆ ಸಂಬಂಧಿಸಿದಂತೆ ದಿನಾಂಕ 10–6–2004ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ ಹಾಗೂ ಸದರಿ ಅಧಿಕಾರಿಯವರಿಗೆ ಸದರಿ 10 ವರ್ಷಗಳ ಸೇವಾ ಅವಧಿಯಲ್ಲಿ ಯಾವುದೇ ಬಡ್ತಿ ನೀಡಿರುವುದಿಲ್ಲ ಮತ್ತು ಬಡ್ತಿಯನ್ನು ನಿರಾಕರಿಸಿರುವುದಿಲ್ಲ. ಆದುದರಿಂದ ಮೇಲೆ ಓದಲಾದ (3)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ತಮ್ಮ ಪತ್ರದಲ್ಲಿ ಸದರಿ ನಿವೃತ್ತ ಅಧಿಕಾರಿಯವರಿಗೆ ಆಯ್ಕೆಕಾಲಿಕ ವೇತನ ಶ್ರೇಣಿಯನ್ನು ದಿನಾಂಕ 10–6–2004ರಿಂದ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 393 ಪಿಪಿಇ 2006, ಬೆಂಗಳೂರು, ದಿನಾಂಕ: 4ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು 1ನೇ ಜೆಎಂಎಫ್‌ಸಿ ನ್ಯಾಯಾಲಯ, ದಾವಣಗೆರೆ ಅವರಿಗೆ ದಿನಾಂಕ 10–6–2004ರಿಂದ ಅನ್ವಯವಾಗುವಂತೆ ಸರ್ಕಾರದ ಆದೇಶ ನಂ. ಎಫ್‌ಡಿ 74 ಎಸ್‌ಆರ್‌ಪಿ 84, ದಿನಾಂಕ 15–10–84ರ ಖಂಡಿಕೆ (3)ರ ಅನ್ವಯ ಸಹಾಯಕ ಸರ್ಕಾರಿ ಅಭಿಯೋಜಕರ ವೇತನ ಶ್ರೇಣಿ ರೂ. 6000–150–7200–200–8800–260–10880–320–11200ರಿಂದ ನಂತರದ ವೇತನ ಶ್ರೇಣಿ ರೂ. 6300–150–7200–200–8800–260–10880–320–11840ರ ಆಯ್ಕೆಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.240

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಫೋಸ ಮತ್ತು ಅಭಿಯೋಗಗಳು)

**ಆರ್ಥಿಕ ಸಚಿವಾಲಯ**

**ವಿಷಯಃ** 1–7–2007ರಿಂದ ರಾಜ್ಯದಲ್ಲಿ ಸಾರಾಯಿ ಮಾರಾಟ ನಿಷೇಧವನ್ನು ಜಾರಿಗೊಳಿಸಿರುವ ಹಿನ್ನೆಲೆಯಲ್ಲಿ ಅಬಕಾರಿ ಇಲಾಖೆಯ ಪುನರ್‌ರಚನೆ, ಸಿಬ್ಬಂದಿ ಮರುವಿನ್ಯಾಸ, ಹೆಚ್ಚುವರಿ ಹುದ್ದೆಗಳ ಸೃಜನೆ ಮತ್ತು ಹುದ್ದೆಗಳ ಸ್ಥಳಾಂತರ ಕುರಿತ ಆದೇಶ.

**ಓದಲಾಗಿದೆಃ** 1. ಸರ್ಕಾರದ ಆದೇಶ ಸಂಃ ಎಫ್‌ಡಿ 212 ಇಪಿಎಸ್ 2004 ದಿನಾಂಕ 05–05–2005.

2. ಅಬಕಾರಿ ಆಯುಕ್ತರ ಪತ್ರ ಸಂಃ ಇಸಿಇ 04 ಟಿಎಂಪಿ 2007 ದಿನಾಂಕ 30–08–2007.

3. ಅಬಕಾರಿ ಆಯುಕ್ತರ ಪತ್ರ ಸಂಃ ಇಸಿಇ 04 ಟಿಎಂಪಿ 2007 ದಿನಾಂಕ 29–08–2008.

**ಪ್ರಸ್ತಾವನೆಃ**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 05–05–2005ರಲ್ಲಿ ಅಬಕಾರಿ ಇಲಾಖೆಯ ಜಾರಿ ಮತ್ತು ತನಿಖೆ ಕಾರ್ಯಗಳನ್ನು ಚುರುಕುಗೊಳಿಸುವ ಉದ್ದೇಶದಿಂದ ಇಲಾಖೆಯನ್ನು ಆಡಳಿತ ಹಾಗೂ ಜಾರಿ ಮತ್ತು ತನಿಖಾ ವಿಭಾಗಗಳಾಗಿ ಪ್ರತ್ಯೇಕಿಸಿ ಇಲಾಖೆಯ ಹುದ್ದೆಗಳನ್ನು ಮರುವಿನ್ಯಾಸಗೊಳಿಸಲಾಗಿತ್ತು. ಇಲ್ಲಿಯವರೆಗೆ ಜಿಲ್ಲೆಯ ಅಬಕಾರಿ ಉಪ ಆಯುಕ್ತರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅಬಕಾರಿ ಅಧೀಕ್ಷಕರನ್ನು ಅಬಕಾರಿ ಅಧೀಕ್ಷಕ (ಇಐಬಿ) ಎಂದು ಮರು ಪದನಾಮಗೊಳಿಸಿ ಜಿಲ್ಲೆಯ ಜಾರಿ ಮತ್ತು ತನಿಖಾ ವಿಭಾಗದ ಮುಖ್ಯಸ್ಥರನ್ನಾಗಿ ಮಾಡಿ ಜಿಲ್ಲೆಯ ಜಾರಿ ಮತ್ತು ತನಿಖಾ ಕೆಲಸಗಳನ್ನು ವಿಭಾಗೀಯ ಅಬಕಾರಿ ಜಂಟಿ ಆಯುಕ್ತರು (ಇ ಅಂಡ್ ಐ) ಇವರ ಮೇಲ್ವಿಚಾರಣೆಗೆ ಒಳಪಡಿಸಲಾಗಿತ್ತು. ಅದೇ ರೀತಿ ರಾಜ್ಯಾದ್ಯಂತ 57 ಇಐಬಿ ಮತ್ತು ಉಪ ವಿಭಾಗಗಳನ್ನಾಗಿ ಪುನರ್‌ವಿಂಗಡಿಸಿ ಪ್ರತಿ ಉಪ ವಿಭಾಗಕ್ಕೆ ಒಂದರಂತೆ ಅಬಕಾರಿ ಉಪ ಅಧೀಕ್ಷಕರನ್ನು re-deploy ಮಾಡುವ ಮೂಲಕ ಇವರ ಕಾರ್ಯವ್ಯಾಪ್ತಿಯನ್ನು ಗೊತ್ತುಪಡಿಸಲಾಯಿತು. ಅದೇ ರೀತಿ 224 ತಾಲ್ಲೂಕಾ ಇ ಅಂಡ್ ಐ ಕಛೇರಿಗಳನ್ನಾಗಿ ವಿಂಗಡಿಸಿ ಇಲ್ಲಿ ಜಾರಿ ಮತ್ತು ತನಿಖಾ ಕಾರ್ಯಗಳನ್ನು ನಿರ್ವಹಿಸಲು ಅಬಕಾರಿ ಉಪ ನಿರೀಕ್ಷಕರಿಗೆ ಅವರ ಕಾರ್ಯವ್ಯಾಪ್ತಿಯನ್ನು ನಿಗದಿಪಡಿಸಲಾಯಿತು. ರಾಜ್ಯದಲ್ಲಿನ 224 ಅಬಕಾರಿ ತಾಲ್ಲೂಕುಗಳಿಗೆ ಪ್ರತಿ ತಾಲ್ಲೂಕಿಗೆ ಒಂದು ಹುದ್ದೆಯಂತೆ ಅಬಕಾರಿ ನಿರೀಕ್ಷಕರನ್ನು re-deploy ಮಾಡುವ ಮೂಲಕ ಇವರ ಕಾರ್ಯವ್ಯಾಪ್ತಿಯನ್ನು ನಿಗದಿಪಡಿಸಲಾಗಿತ್ತು. ಜಿಲ್ಲಾ ಮಟ್ಟದಲ್ಲಿ ಅಬಕಾರಿ ಅಧೀಕ್ಷಕರು ಅಬಕಾರಿ ಉಪ ಆಯುಕ್ತರ ಅಧೀನದಿಂದ ಹಿಂದಕ್ಕೆ ಪಡೆದನಂತರ, ಇವರಿಗೆ ಕಛೇರಿ ಕೆಲಸದಲ್ಲಿ ಮತ್ತು ಸಾರಾಯಿ ಬಾಡಿಗೆ ವಸೂಲಿ ಮಾಡುವಲ್ಲಿ ನೆರವಾಗಲು ಅಬಕಾರಿ ಉಪ ಅಧೀಕ್ಷಕರನ್ನು ಒದಗಿಸಲಾಯಿತು. ಈ ವ್ಯವಸ್ಥೆಯಿಂದ ಆಡಳಿತ ಹಾಗೂ ಜಾರಿ ಮತ್ತು ತನಿಖಾ ವಿಭಾಗಗಳ ಅಧಿಕಾರಿಗಳು:ನೌಕರರಲ್ಲಿ ಸಾಮರಸ್ಯ ಮೂಡದೇ ಸಮನ್ವಯ ಕೊರತೆಯಿಂದ ಇಲಾಖೆಯ ಕೆಲಸಗಳು ಪರಿಣಾಮಕಾರಿಯಾಗಿ ಆಗುತ್ತಿಲ್ಲವೆಂದೂ, ಅಲ್ಲದೇ ಲೋಪದೋಷಗಳಿಗೆ ಯಾರನ್ನು ಹೊಣೆಗಾರರನ್ನಾಗಿ ಮಾಡಬೇಕೆಂಬ ಬಗ್ಗೆ ಜಿಜ್ಞಾಸೆ ಉಂಟಾಗಿರುತ್ತದೆಂದೂ, ಇದಲ್ಲದೇ ಸರ್ಕಾರವು, 1–7–2007 ರಿಂದ ರಾಜ್ಯದಲ್ಲಿ ಸಾರಾಯಿ ಮಾರಾಟವನ್ನು ನಿಷೇಧಿಸಿರುವ ಹಿನ್ನೆಲೆಯಲ್ಲಿ ಪ್ರಸ್ತುತ ಆಡಳಿತ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು ಮತ್ತು ನೌಕರರ ಕಾರ್ಯಒತ್ತಡವು ಕಡಿಮೆಯಾಗಿದ್ದು, ಸಾರಾಯಿ ನಿಷೇಧದಿಂದ ಅಬಕಾರಿ ಅಕ್ರಮಗಳು ತೀವ್ರವಾಗಿ ಹೆಚ್ಚಾಗಿದ್ದು, ಇಂತಹ ಅಕ್ರಮ ಚಟುವಟಿಕೆಗಳನ್ನು ತಡೆಗಟ್ಟಲು ಆಡಳಿತ ಮತ್ತು ಜಾರಿ ವಿಭಾಗಗಳನ್ನು ಒಗ್ಗೂಡಿಸಿ ಒಂದೇ ಮಾರ್ಗದಲ್ಲಿ (one line of control) ಕಾರ್ಯನಿರ್ವಹಿಸುವಂತೆ ಸಿಬ್ಬಂದಿ ಮತ್ತು ಇಲಾಖೆಯ ಆಡಳಿತ ನಿರ್ವಹಣೆಯಲ್ಲಿ ಹೊಣೆಗಾರರನ್ನಾಗಿ ಮಾಡಿ (accountability) ಅಧಿಕಾರ ಶ್ರೇಣಿಯನ್ನು ಪುನರ್‌ರಚಿಸುವುದು ಸೂಕ್ತವೆಂದು ಪರಿಗಣಿಸಿ ಅಬಕಾರಿ ಆಯುಕ್ತರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾಪಿಸಿರುತ್ತಾರೆ. ಅಲ್ಲದೇ, ಹೆಚ್ಚಾಗಿರುವ ಅಕ್ರಮ ಚಟುವಟಿಕೆಗಳನ್ನು ತಡೆಗಟ್ಟಲು ಇಲಾಖೆಯ ಪುನರ್ ರಚನೆ, ಸಿಬ್ಬಂದಿ ಮರುವಿನ್ಯಾಸ, ಹೆಚ್ಚುವರಿ ಹುದ್ದೆಗಳ/ಕಛೇರಿಗಳ ಸೃಜನೆ ಮತ್ತು ಹುದ್ದೆಗಳ ಸ್ಥಳಾಂತರ ಮಾಡಲು ಹಾಲಿ ಇರುವ ಹುದ್ದೆಗಳನ್ನು ಸ್ಥಳಾಂತರಿಸಲು ಅಬಕಾರಿ ಆಯುಕ್ತರು ಪ್ರಸ್ತಾಪಿಸಿರುತ್ತಾರೆ.

ಉಲ್ಲೇಖ(3)ರ ಪತ್ರದಲ್ಲಿ ಇದುವರೆವಿಗೆ ತಾಲ್ಲೂಕು ಜಾರಿ ಮತ್ತು ತನಿಖೆ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಬಕಾರಿ ಉಪ ನಿರೀಕ್ಷಕರು ಮತ್ತು ಅಬಕಾರಿ ರಕ್ಷಕರುಗಳ ವೇತನ ಮತ್ತು ಭತ್ಯೆ ಹಾಗೂ ಡಿ.ಸಿ.ಬಿಲ್ಲುಗಳ ಮೂಲಕ ಮೊತ್ತವನ್ನು ಸೆಳೆಯುವ ಅಧಿಕಾರವನ್ನು ಸಂಬಂಧಪಟ್ಟ ಉಪ ವಿಭಾಗದ ಅಬಕಾರಿ ಉಪ ಅಧೀಕ್ಷಕರಿಗೆ ನೀಡಲಾಗಿತ್ತೆಂದೂ, ಪುನರ್‌ರಚನೆಯ ನಂತರದಲ್ಲಿ ತಾಲ್ಲೂಕು ಮಟ್ಟದಲ್ಲಿ ವಲಯ ಮತ್ತು ಜಾರಿ ಮತ್ತು ತನಿಖೆ ಕಛೇರಿಗಳನ್ನು ಒಗ್ಗೂಡಿಸುತ್ತಿರುವ ಕಾರಣ ತಾಲ್ಲೂಕು ಜಾರಿ ಮತ್ತು ತನಿಖೆ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯ ವೇತನ ಮತ್ತು ಭತ್ಯೆ ಹಾಗೂ ಡಿ.ಸಿ.ಬಿಲ್ಲಿನಲ್ಲಿ ಸೆಳೆಯುವ ಮೊತ್ತಗಳ ಅಧಿಕಾರವನ್ನು ವಲಯ ಕಛೇರಿಯಲ್ಲಿ ಕಾರ್ಯನಿರ್ವಹಿಸುವ ಅಬಕಾರಿ ನಿರೀಕ್ಷಕರಿಗೆ ನೀಡುವಂತೆ ಪ್ರಸ್ತಾವನೆ ಸಲ್ಲಿಸಿದ್ದರು.

ಅಬಕಾರಿ ಆಯುಕ್ತರ ಪ್ರಸ್ತಾವನೆಯ ಬಗ್ಗೆ ಸರ್ಕಾರದ ಹಂತದಲ್ಲಿ ಹಲವಾರು ಸಭೆಗಳನ್ನು ನಡೆಸಿ ವಿವರವಾಗಿ ಚರ್ಚಿಸಲಾಗಿದ್ದು, ಸಾರಾಯಿ ಮಾರಾಟವನ್ನು ನಿಷೇಧಿಸಿರುವ ಹಿನ್ನೆಲೆಯಲ್ಲಿ ಇಲಾಖೆಯು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುವಂತೆ ಅಬಕಾರಿ ಇಲಾಖೆಯ ಪುನರ್ ರಚನೆಯ ಪ್ರಸ್ತಾವನೆಯನ್ನು ಸೂಕ್ತವಾಗಿ ಮರು ಪರಿಷ್ಕರಣೆ ಮಾಡಲು ಅಬಕಾರಿ ಆಯುಕ್ತರಿಗೆ ಸೂಚಿಸಲಾಗಿತ್ತು. ಅದರಂತೆ, ಅಬಕಾರಿ ಆಯುಕ್ತರು ಸಲ್ಲಿಸಿರುವ ಪರಿಷ್ಕೃತ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಅಬಕಾರಿ ಇಲಾಖೆಯನ್ನು ಪುನರ್‌ರಚನೆ ಮಾಡಲು ಮತ್ತು ಸಿಬ್ಬಂದಿ ಮರುವಿನ್ಯಾಸಗೊಳಿಸುವ ಮತ್ತು ಹೊಸ ಹುದ್ದೆಗಳನ್ನು ಮಂಜೂರು ಮಾಡುವ ಪ್ರಸ್ತಾವನೆಗೆ ಸರ್ಕಾರವು ಅನುಮೋದಿಸಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ. ಎಫ್‌ಡಿ 42 ಇಪಿಎಸ್ 2007(1), ಬೆಂಗಳೂರು, ದಿನಾಂಕ 24ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಅಬಕಾರಿ ಇಲಾಖೆಯಲ್ಲಿನ ಸಿಬ್ಬಂದಿಯನ್ನು ಈ ಆದೇಶದ ಅನುಬಂಧ–I ಮತ್ತು ಅನುಬಂಧ–I(ಎ) ರಿಂದ, ಅನುಬಂಧ–I(ಹೆಚ್)ರಲ್ಲಿ ವಿವರಿಸಿರುವಂತೆ ಮರುವಿನ್ಯಾಸಗೊಳಿಸುವ ಮೂಲಕ ಹಾಗೂ ಅನುಬಂಧ–II ರಲ್ಲಿ ವಿವರಿಸಿರುವಂತೆ 489 ವಿವಿಧ ವೃಂದದಲ್ಲಿ ಹೊಸ ಹುದ್ದೆಗಳನ್ನು ಸೃಜಿಸುವ ಮೂಲಕ ಈ ಕೆಳಕಂಡ ಬದಲಾವಣೆಗಳೊಂದಿಗೆ ಅಬಕಾರಿ ಇಲಾಖೆಯನ್ನು ಪುನರ್‌ರಚನೆ ಮಾಡುವ ಪ್ರಸ್ತಾವನೆಗೆ 01–04–2008 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಲಾಗಿದೆ.

1. ಅಪರಾಧ ಪ್ರಕರಣಗಳನ್ನು ಸಮಗ್ರವಾಗಿ ಪರಾಮರ್ಶಿಸುವ ನಿಟ್ಟಿನಲ್ಲಿ ಅಬಕಾರಿ ಆಯುಕ್ತರಿಗೆ ನೆರವಾಗಲು ಕೇಂದ್ರ ಕಛೇರಿಯಲ್ಲಿ ಒಂದು ಅಪರ ಅಬಕಾರಿ ಆಯುಕ್ತರು (ಜಾರಿ ಮತ್ತು ಅಪರಾಧ), ಎಂಬ ಒಂದು ಹೊಸ ಹುದ್ದೆಯನ್ನು ವೇತನ ಶ್ರೇಣಿ ರೂ. 26250–36500ರಲ್ಲಿ ಸೃಜಿಸಿದೆ.
2. ಕರ್ನಾಟಕ ರಾಜ್ಯ ಪಾನೀಯ ನಿಗಮ ನಿಯಮಿತದಲ್ಲಿ ಕಾರ್ಯಕಾರಿ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಲು ಅಬಕಾರಿ ಇಲಾಖೆಯ ಒಬ್ಬ ಉನ್ನತ ಅಧಿಕಾರಿಯನ್ನು ನೇಮಿಸುವ ದೃಷ್ಟಿಯಿಂದ ಒಂದು ಅಪರ ಅಬಕಾರಿ ಆಯುಕ್ತರು (ಪಾನೀಯ ನಿಗಮ) ಎಂಬ ಹೊಸ ಹುದ್ದೆಯನ್ನು ವೇತನ ಶ್ರೇಣಿ ರೂ.26250–36500ರಲ್ಲಿ ಸೃಜಿಸಿದೆ.
3. ಗುಲ್ಬರ್ಗಾ, ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಗಳು ಆಂಧ್ರಪ್ರದೇಶದ ಗಡಿಭಾಗಕ್ಕೆ ಹೊಂದಿಕೊಂಡಿದ್ದು, ಆಂಧ್ರಪ್ರದೇಶಗಳಲ್ಲಿ ಅಧಿಕೃತವಾಗಿ ಶೇಂದಿ ಮಾರಾಟವಿರುವುದರಿಂದ ಆಂಧ್ರಪ್ರದೇಶದ ಗಡಿಭಾಗಗಳಿಂದ ಶೇಂದಿಯನ್ನು ಈ ಜಿಲ್ಲೆಗಳಿಗೆ ಸಾಗಾಣಿಕೆ ಮಾಡಿ ಮಾರಾಟ ಮಾಡುವ ಸಾಧ್ಯತೆಗಳಿರುವುದರಿಂದ ಅಲ್ಲದೆ ರಾಜ್ಯದಲ್ಲಿ ಸಾರಾಯಿಯನ್ನು ನಿಷೇಧಿಸಿರುವುದರಿಂದ ಮದ್ಯಸಾರ, ಮದ್ಯದ ಕಳ್ಳಸಾಗಾಣಿಕೆ ಮತ್ತು ಅಬಕಾರಿ ಅಕ್ರಮಗಳು ಹೆಚ್ಚಾಗುವ ಸಾಧ್ಯತೆ ಇರುವುದರಿಂದ ರಾಷ್ಟ್ರೀಯ ಹೆದ್ದಾರಿ 13 ಮುತ್ತ 4 ಇವು ಹಾದುಹೋಗುವ ಹೊಸಪೇಟೆಯನ್ನು ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡು ಚಿತ್ರದುರ್ಗ, ದಾವಣಗೆರೆ, ಗದಗ, ಬಳ್ಳಾರಿ, ಕೊಪ್ಪಳ ಜಿಲ್ಲೆಗಳ ಕಾರ್ಯವ್ಯಾಪ್ತಿಯೊಂದಿಗೆ ಹೊಸ ವಿಭಾಗವನ್ನು ಪೂರಕ ಹುದ್ದೆಗಳೊಂದಿಗೆ ಮತ್ತು ವಾಹನ ಮುಂತಾದ ಸೌಕರ್ಯದೊಂದಿಗೆ ಸೃಜಿಸಿದೆ ಹಾಗೂ ಅಬಕಾರಿ ಆಯುಕ್ತರ ಕಛೇರಿಯಲ್ಲಿರುವ ಅಬಕಾರಿ ಜಂಟಿ ಆಯುಕ್ತ (ಆಡಿಟ್) ಈ ಹುದ್ದೆಯನ್ನು ಹೊಸಪೇಟೆ ವಿಭಾಗಕ್ಕೆ ಸ್ಥಳಾಂತರಿಸಿ ಅಬಕಾರಿ ಜಂಟಿ ಆಯುಕ್ತ (ಜಾರಿ ಮತ್ತು ತನಿಖೆ) ಎಂದು ಮರು ಪದನಾಮಗೊಳಿಸಿದೆ. ಸದರಿ ಹುದ್ದೆಯ ಕಾರ್ಯವ್ಯಾಪ್ತಿಯನ್ನು ನಿಗದಿಪಡಿಸಲು ಪ್ರತ್ಯೇಕವಾಗಿ ಅಧಿಸೂಚನೆ ಹೊರಡಿಸಲಾಗಿದೆ.
4. ಬೆಂಗಳೂರು ನಗರ ಜಿಲ್ಲೆಯಲ್ಲಿ ಹಾಲಿ 3 ಅಬಕಾರಿ ಉಪ ಆಯುಕ್ತರ ಹುದ್ದೆಗಳು ಇದ್ದು, ಅಬಕಾರಿ ಆಯುಕ್ತರ ಕಛೇರಿಯಲ್ಲಿರುವ ಅಬಕಾರಿ ಉಪ ಆಯುಕ್ತರು, ಐಎಂಎಲ್ ಡ್ಯೂಟಿ ಮಾನಿಟರಿಂಗ್ ಘಟಕ ಈ ಹುದ್ದೆಯನ್ನು ಬೆಂಗಳೂರು ನಗರ ಜಿಲ್ಲೆಗೆ ಸ್ಥಳಾಂತರಿಸಿ, ಹಾಲಿ ಇರುವ ಅಬಕಾರಿ ಉಪ ಆಯುಕ್ತರು, ಹೆಚ್ಚುವರಿ ಅಬಕಾರಿ ಉಪ ಆಯುಕ್ತರು–1, ಹೆಚ್ಚುವರಿ ಅಬಕಾರಿ ಉಪ ಆಯುಕ್ತರು–2 ಹುದ್ದೆಗಳನ್ನು ಮತ್ತು ಅಬಕಾರಿ ಆಯುಕ್ತರ ಕಛೇರಿಯಿಂದ ಸ್ಥಳಾಂತರಿಸಲಾದ ಅಬಕಾರಿ ಉಪ ಆಯುಕ್ತರು, ಡ್ಯೂಟಿ ಮಾನಿಟರಿಂಗ್ ಘಟಕ ಈ ಹುದ್ದೆಗಳನ್ನು ಅಬಕಾರಿ ಉಪ ಆಯುಕ್ತರು – ಬೆಂಗಳೂರು ಪೂರ್ವ, ಪಶ್ಚಿಮ, ಉತ್ತರ ಮತ್ತು ದಕ್ಷಿಣ ಎಂಬುದಾಗಿ ಮರು ಪದನಾಮಕರಣಗೊಳಿಸಲಾಗಿದೆ ಹಾಗೂ ಇವರುಗಳಿಗೆ ತಲಾ 12 ವಲಯಗಳ ಕಾರ್ಯವ್ಯಾಪ್ತಿಯನ್ನು ವಹಿಸಲಾಗಿದೆ. ಈ ಅಧಿಕಾರಿಗಳ ಕಾರ್ಯವ್ಯಾಪ್ತಿಯನ್ನು ನಿಗದಿಪಡಿಸುವ ಬಗ್ಗೆ ಪ್ರತ್ಯೇಕವಾದ ಅಧಿಸೂಚನೆಯನ್ನು ಹೊರಡಿಸಲಾಗಿದೆ.
5. ಹಾಲಿ ಕರ್ನಾಟಕ ಅಬಕಾರಿ ಕಾಯ್ದೆಯ ಕಲಂ 43ಎ ಅಡಿ ಪ್ರಾಧಿಕೃತ ಅಧಿಕಾರಿಯಾಗಿ ಕಾರ್ಯನಿರ್ವಹಿಸಲು ಅಬಕಾರಿ ಅಧೀಕ್ಷಕರು (ಜಿಲ್ಲಾ ವಿಚಕ್ಷಣ ದಳ) ಇವರುಗಳಿಗೆ ಇರುವ ಅಧಿಕಾರವನ್ನು ಹಿಂತೆಗೆದುಕೊಂಡು, ಈ ಅಧಿಕಾರವನ್ನು ಆಯಾ ಜಿಲ್ಲೆಗಳ ಅಬಕಾರಿ ಉಪ ಆಯುಕ್ತರುಗಳಿಗೆ ನೀಡಿ ಪ್ರತ್ಯೇಕವಾದ ಅಧಿಸೂಚನೆಯನ್ನು ಹೊರಡಿಸಲಾಗಿದೆ.
6. ರಾಜ್ಯಾದ್ಯಂತ ಸಾರಾಯಿ ನಿಷೇದದಿಂದಾಗಿ ಜಿಲ್ಲಾ ಮಟ್ಟದಲ್ಲಿ ಅಬಕಾರಿ ಉಪ ಆಯುಕ್ತರಿಗೆ ಕೆಲಸದ ಒತ್ತಡವು ಕಡಿಮೆ ಆಗಿರುವುದರಿಂದ ಮತ್ತು ಜಿಲ್ಲಾ ಅಬಕಾರಿ ಉಪ ಆಯುಕ್ತರುಗಳು ಮತ್ತು ಅಬಕಾರಿ ಅಧೀಕ್ಷಕರುಗಳು ಜಾರಿ ಮತ್ತು ತನಿಖೆ ಕಾರ್ಯಗಳನ್ನು ನಿರ್ವಹಿಸಬೇಕಾಗಿರುವುದರಿಂದ, ಡಿಸ್ಟಿಲರಿ ಮತ್ತು ಕೆ.ಎಸ್.ಬಿ.ಸಿ.ಎಲ್ ಡಿಪೊ ಹಾಗೂ ಇತರೇ ಕಡೆ ಆಡಳಿತವನ್ನು ಚುರುಕುಗೊಳಿಸುವ ಹಾಗೂ ಹೆಚ್ಚು ಜವಾಬ್ದಾರಿಯುತವನ್ನಾಗಿ ಮಾಡುವುದನ್ನು ಸರ್ಕಾರವು ಮನಗಂಡು ಜಿಲ್ಲಾ ಮಟ್ಟದ ಅಬಕಾರಿ ಅಧೀಕ್ಷಕರುಗಳ ಹುದ್ದೆಗಳನ್ನು ಜಿಲ್ಲೆಯಿಂದ ಸ್ಥಳಾಂತರಿಸುವ ಅವಶ್ಯಕತೆ ಇರುವುದನ್ನು ಮನಗಂಡಿತು. ಆದರೆ, ಬೆಂಗಳೂರು ನಗರ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ ಮತ್ತು ಸನ್ನದುಗಳ ಸಂಖ್ಯೆ ಹೆಚ್ಚಾಗಿರುವುದರಿಂದಲೂ ಮತ್ತು 15 ಡಿಸ್ಟಿಲರಿಗಳೂ ಸಹ ಕಾರ್ಯನಿರ್ವಹಿಸುತ್ತಿರುವುದರಿಂದ, ಕಾರ್ಯ ಒತ್ತಡವು ಹೆಚ್ಚಾಗಿದ್ದು. ಬೆಂಗಳೂರು ನಗರ ಜಿಲ್ಲೆಯಿಂದಲೇ ಒಟ್ಟು ಅಬಕಾರಿ ಆದಾಯದ ಶೇಕಡ 32.68ರಷ್ಟು ರಾಜಸ್ವ ಸಂಗ್ರಹವಾಗುತ್ತಿದ್ದು, ಕಳ್ಳಭಟ್ಟಿ ಕೇಂದ್ರಗಳು ಮತ್ತು ಆಂಧ್ರ ಪ್ರದೇಶ ಹಾಗೂ ತಮಿಳುನಾಡು ರಾಜ್ಯಗಳ ಗಡಿ ಪ್ರದೇಶಗಳಿಂದ ಕಳ್ಳಸಾಗಾಣಿಕೆ ತಡೆಗಟ್ಟಲು ಜಾರಿ ಮತ್ತು ತನಿಖಾ ಕಾರ್ಯಾಚರಣೆಗಳನ್ನು ನಡೆಸುವುದು ಹೆಚ್ಚಿನ ಪ್ರಾಮುಖ್ಯತೆ ಹೊಂದಿರುವುದರಿಂದ, ಬೆಂಗಳೂರು ನಗರ ಜಿಲ್ಲೆಯಲ್ಲಿ ಅಬಕಾರಿ ಅಧೀಕ್ಷಕ ಹುದ್ದೆಗಳ ನೇತೃತ್ವದಲ್ಲಿ ಹಾಲಿ ಇರುವ 4 ಜಾರಿ ಮತ್ತು ತನಿಖೆ ದಳಗಳನ್ನು ಮುಂದುವರಿಸುವುದು ಅಗತ್ಯವಾಗಿದೆ. ಆದುದರಿಂದ ಬೆಂಗಳೂರು ನಗರ ಜಿಲ್ಲೆಯಲ್ಲಿ ಹಾಲಿ ಇರುವ 4 ಇ.ಐ.ಬಿ.ಗಳ ಅಬಕಾರಿ ಅಧೀಕ್ಷಕ ಹುದ್ದೆಗಳನ್ನು ಪೂರಕ ಹುದ್ದೆಗಳೊಂದಿಗೆ ಹಾಲಿ ಇರುವಂತೆಯೇ

ಮುಂದುವರೆಸಲಾಗಿದೆ. ಇತರ ಎಲ್ಲಾ ಜಿಲ್ಲೆಗಳ ಇ.ಐ.ಬಿ. ಅಬಕಾರಿ ಅಧೀಕ್ಷಕರುಗಳ ಹುದ್ದೆಗಳನ್ನು ಈ ಆದೇಶದ ಅನುಬಂಧ–Iರಲ್ಲಿ ವಿವರಿಸಿರುವಂತೆ 13 ಹುದ್ದೆಗಳನ್ನು ಕರ್ನಾಟಕ ರಾಜ್ಯ ಪಾನೀಯ ನಿಗಮ ನಿಯಮಿತದ ಡಿಪೋಗಳಿಗೆ, 3 ಹುದ್ದೆಗಳನ್ನು ಅಬಕಾರಿ ಆಯುಕ್ತರ ಕಛೇರಿಗೆ, 5 ಹುದ್ದೆಗಳನ್ನು ಹಾಲಿ ಇರುವ ಜಾರಿ ಮತ್ತು ತನಿಖೆ ವಿಭಾಗ ಕಛೇರಿಗಳಿಗೆ ಮತ್ತು 1 ಹುದ್ದೆಯನ್ನು ಹೊಸದಾಗಿ ಸೃಜಿಸಲಾಗಿರುವ ಹೊಸಪೇಟೆ ವಿಭಾಗ ಕಛೇರಿಗೆ ಹಾಗೂ 1 ಹುದ್ದೆಯನ್ನು ರಾಜ್ಯ ವಿಚಕ್ಷಣ ದಳ, ಬೆಂಗಳೂರು ಈ ಕಛೇರಿಗಳಿಗೆ ಸ್ಥಳಾಂತರಿಸಿದೆ. ಮತ್ತು ಸದರಿ ಜಿಲ್ಲಾ ಇ.ಐ.ಬಿ.ಗಳಲ್ಲಿನ ಪೂರಕ ಹುದ್ದೆಗಳನ್ನು ಅನುಬಂಧ–I(ಎ), I(ಬಿ), I(ಸಿ), I(ಡಿ) ಮತ್ತು I(ಇ)ಗಳಲ್ಲಿ ನಮೂದಿಸಿರುವಂತೆ ಅಗತ್ಯವಿರುವ ವಿವಿಧ ಕಛೇರಿಗಳಿಗೆ ಮರುಹೊಂದಾಣಿಕೆಗೊಳಿಸಿ ಸ್ಥಳಾಂತರಿಸಲಾಗಿದೆ.

7. ರಾಜ್ಯದಲ್ಲಿ ಪ್ರಸ್ತುತ 57 ಅಬಕಾರಿ ಉಪ ವಿಭಾಗಗಳು ಇದ್ದು, ಇವುಗಳ ಜೊತೆಗೆ ಆನೇಕಲ್, ಹಿರಿಯೂರು, ಮಡಿಕೇರಿ, ಕುಂದಾಪುರ, ಮಂಗಳೂರು ಮತ್ತು ಕೋಲಾರಗಳನ್ನು ಕೇಂದ್ರಸ್ಥಾನಗಳನ್ನಾಗಿ ಮಾಡಿಕೊಂಡು ಹೊಸದಾಗಿ 6 ಉಪ ವಿಭಾಗಳನ್ನು ಸೃಜಿಸಲಾಗಿದೆ. ಈ ಹೊಸ ಉಪ ವಿಭಾಗಗಳಿಗೆ ಬೇಕಾಗುವ ಪೂರಕ ಹುದ್ದೆಗಳನ್ನು ಈ ಆದೇಶದ ಅನುಬಂಧಗಳಲ್ಲಿ ವಿವರಿಸಿರುವಂತೆ ಸ್ಥಳಾಂತರಿಸುವ ಮೂಲಕ ಹಾಗೂ ಹೊಸ ಹುದ್ದೆಗಳನ್ನು ಸೃಜಿಸುವ ಮೂಲಕ ಒದಗಿಸಲಾಗಿದೆ ಮತ್ತು ಈ ಹೊಸ ಉಪ ವಿಭಾಗಗಳ ಕಾರ್ಯವ್ಯಾಪ್ತಿಯನ್ನು ನಿಗದಿಪಡಿಸಲು ಪ್ರತ್ಯೇಕವಾಗಿ ಅಧಿಸೂಚನೆ ಹೊರಡಿಸಲಾಗಿದೆ.

8. ಪ್ರಸ್ತುತ ಕರ್ನಾಟಕ ರಾಜ್ಯ ಪಾನೀಯ ನಿಗಮದ 51 ಡಿಪೋಗಳ ಪೈಕಿ 28 ಡಿಪೋಗಳಿಗೆ ಮಂಜೂರಾಗಿರುವ 28 ಅಬಕಾರಿ ಉಪ ಅಧೀಕ್ಷಕ ಹುದ್ದೆಗಳ ಪೈಕಿ 6 ಅಬಕಾರಿ ಉಪ ಅಧೀಕ್ಷಕ ಹುದ್ದೆಗಳನ್ನು ಹೊಸದಾಗಿ ಸೃಜಿಸಲಾಗಿರುವ 6 ಉಪ ವಿಭಾಗಗಳಿಗೆ ತಲಾ ಒಂದು ಹುದ್ದೆಯಂತೆ 6 ಹುದ್ದೆಗಳನ್ನು ಬೆಂಗಳೂರು ನಗರ ಜಿಲ್ಲೆಯ ಉಪ ಆಯುಕ್ತರು ಉತ್ತರ ಮತ್ತು ಪಶ್ಚಿಮ ಈ ಕಛೇರಿಗಳಿಗೆ ತಲಾ 1 ಹುದ್ದೆಯಂತೆ 2 ಹುದ್ದೆಗಳನ್ನು, ಅಬಕಾರಿ ಆಯುಕ್ತರ ಕಛೇರಿಗೆ 3 ಹುದ್ದೆಗಳನ್ನು, ಅನುಬಂಧ–I(ಎಫ್)ರಲ್ಲಿ ನಮೂದಿಸಿರುವಂತೆ ಸ್ಥಳಾಂತರಿಸಿ ಮರುಹೊಂದಾಣಿಕೆಗೊಳಿಸಿದೆ ಹಾಗೂ ಇನ್ನುಳಿದ 17 ಹುದ್ದೆಗಳನ್ನು ರದ್ದುಪಡಿಸಲಾಗಿದೆ.

9. ಅಬಕಾರಿ ರಕ್ಷಕರ ಹುದ್ದೆಗಳನ್ನು ಈ ಆದೇಶದ ಅನುಬಂಧ–I(ಹೆಚ್)ರಲ್ಲಿ ವಿವರಿಸಿರುವಂತೆ ಕರ್ನಾಟಕ ರಾಜ್ಯ ಪಾನೀಯ ನಿಗಮ ನಿಯಮಿತ ಮತ್ತು ಇಲಾಖೆಯ ವಿವಿಧ ಕಛೇರಿಗಚಿಗೆ ಮರು ವಿನ್ಯಾಸಗೊಳಿಸಲಾಗಿದೆ.

10. ಹಲವು ವಲಯಗಳ ಭೌಗೋಳಿಕ ವಿಸ್ತೀರ್ಣ ಮತ್ತು ಸನ್ನದುಗಳ ಸಂಖ್ಯೆ ಹೆಚ್ಚಿಗೆ ಇರುವುದರಿಂದ ಮತ್ತು ಕೆಲವು ವಲಯಗಳ ವ್ಯಾಪ್ತಿಯಲ್ಲಿ ಸನ್ನದುಗಳ ಸಂಖ್ಯೆ ತೀರಾ ಕಡಿಮೆ ಇರುವುದರಿಂದ ಅಂತಹ 12 ವಲಯಗಳನ್ನು ಸದರಿ ವಲಯಕ್ಕೆ ಹೊಂದಿಕೊಂಡಿರುವ ಅಕ್ಕಪಕ್ಕದ ವಲಯಗಳಲ್ಲಿ ವಿಲೀನಗೊಳಿಸಲಾಗಿದೆ. ಅದೇ ರೀತಿ ಭೌಗೋಳಿಕ ವಿಸ್ತೀರ್ಣ ಮತ್ತು ಸನ್ನದುಗಳ ಸಂಖ್ಯೆ ಹೆಚ್ಚಿಗೆ ಇರುವ ವಲಯಗಳನ್ನು ವಿಭಜಿಸುವ ಮೂಲಕ 12 ವಲಯಗಳನ್ನು ಪ್ರತ್ಯೇಕವಾಗಿ ಸೃಜಿಸಲಾಗಿದೆ. ಈ ರೀತಿ ಪ್ರತ್ಯೇಕವಾಗಿ ಸೃಜಿಸಲಾದ ವಲಯಗಳು ಮತ್ತು ವಿಲೀನಗೊಳಿಸಲಾದ ವಲಯಗಳ ವಿವರಗಳು ಈ ಕೆಳಗಿನಂತಿವೆ:–

**ಹೊಸದಾಗಿ ಸೃಜಿಸಲು ಉದ್ದೇಶಿಸಿರುವ ವಲಯಗಳ ಹೆಸರು**

1. ಬಳ್ಳಾರಿ ವಲಯ ನಂ.2
2. ಹೊಸಪೇಟೆ ವಲಯ ನಂ.2
3. ದಾವಣಗೆರೆ ವಲಯ ನಂ.2
4. ಗುಲ್ಬರ್ಗಾ ವಲಯ ನಂ.2
5. ಹಾಸನ ವಲಯ ನಂ.2
6. ಶಿವಮೊಗ್ಗ ವಲಯ ನಂ.2
7. ಮೈಸೂರು ವಲಯ ನಂ.3
8. ಮೈಸೂರು ವಲಯ ನಂ.4
9. ಮಂಗಳೂರು ದಕ್ಷಿಣ ವಲಯ–2
10. ಮಂಗಳೂರು ಉತ್ತರ ವಲಯ–2
11. ಮಂಗಳೂರು ಪೂರ್ವ ವಲಯ–2
12. ಉಡುಪಿ ವಲಯ ನಂ.2

ಪ್ರಸ್ತುತ ಅಸ್ತಿತ್ವದಲ್ಲಿರುವ ಈ ಕೆಳಕಂಡ ವಲಯಗಳನ್ನು ಅವುಗಳ ಮುಂದೆ ನಮೂದಿಸಿರುವ ಪಕ್ಕದ ವಲಯದೊಂದಿಗೆ ವಿಲೀನಗೊಳಿಸಲಾಗಿದೆ.

| ಅಸ್ತಿತ್ವದಲ್ಲಿರುವ ವಲಯಗಳು | ವಿಲೀನವಾಗುವ ಅಕ್ಕಪಕ್ಕದ ವಲಯ |
|---|---|
| 1. ಯಳಂದೂರು ವಲಯ | ಚಾಮರಾಜನಗರ ವಲಯ |
| 2. ಜಗಳೂರು ವಲಯ | ಹರಿಹರ ವಲಯ |
| 3. ಅಫಜಲಪುರ ವಲಯ | ಅಳಂದ ವಲಯ |
| 4. ಆಲೂರು ವಲಯ | ಹಾಸನ ವಲಯ ನಂ.1 |
| 5. ಗುಡಿಬಂಡೆ ವಲಯ | ಬಾಗೇಪಲ್ಲಿ ವಲಯ |
| 6. ಪಾಂಡವಪುರ ವಲಯ | ಶ್ರೀರಂಗಪಟ್ಟಣ ವಲಯ |
| 7. ಶೃಂಗೇರಿ ವಲಯ– | ಕೊಪ್ಪ ವಲಯ |
| 8. ದೇವದುರ್ಗ ವಲಯ | ಮಾನ್ವಿ ವಲಯ |
| 9. ಯಲಬುರ್ಗ ವಲಯ | ಕುಷ್ಟಗಿ ವಲಯ |
| 10. ಸಿದ್ದಾಪುರ ವಲಯ | ಸಿರ್ಸಿ ವಲಯ |
| 11. ಮುಂಡಗೋಡ ವಲಯ | ಯಲ್ಲಾಪುರ ವಲಯ |
| 12. ಸೂಪ ವಲಯ | ದಾಂಡೇಲಿ ವಲಯ |

ವಿಲೀನವಾಗುವ ವಲಯಗಳ ಸಿಬ್ಬಂದಿಯನ್ನು ಅನುಬಂಧ– I(ಜಿ)ರಲ್ಲಿ ನಮೂದಿಸಿರುವಂತೆ ಹೊಸದಾಗಿ ಸೃಜಿಸಲಾದ ವಲಯಗಳಿಗೆ ಸ್ಥಳಾಂತರಿಸಿ ಮರುಹೊಂದಾಣಿಕೆಗೊಳಿಸಿದೆ. ವಿಲೀನಗೊಳ್ಳುವ ಮೂಲಕ ಹಾಗೂ ಹೊಸದಾಗಿ ರಚನೆಯಾಗುವ ವಲಯಗಳ ಕಾರ್ಯವ್ಯಾಪ್ತಿ ನಿಗದಿಪಡಿಸಿ ಪ್ರತ್ಯೇಕವಾಗಿ ಅಧಿಸೂಚನೆ ಹೊರಡಿಸಲಾಗಿದೆ.

11. ಉಲ್ಲೇಖ(1)ರ ಆದೇಶದಲ್ಲಿ ಜಾರಿ ಮತ್ತು ತನಿಖಾ ಕಾರ್ಯಗಳಿಗಾಗಿ ಪ್ರತ್ಯೇಕವಾಗಿ ಗುರುತಿಸಲಾಗಿದ್ದ ತಾಲ್ಲೂಕು ಅಬಕಾರಿ (ಇ ಅಂಡ್ ಐ) ಕಛೇರಿಗಳನ್ನು ಮತ್ತು ಅಬಕಾರಿ ಉಪ ವಿಭಾಗ ಕಛೇರಿಗಳನ್ನು ಇಲಾಖೆಯ ಮುಖ್ಯ ವಾಹಿನಿಯಲ್ಲಿ ವಿಲೀನಗೊಳಿಸಲಾಗಿದೆ. ಇದರಿಂದಾಗಿ ಅಬಕಾರಿ ರಕ್ಷಕ/ಮುಖ್ಯ ರಕ್ಷಕ, ಅಬಕಾರಿ ಉಪ ನಿರೀಕ್ಷಕ ಅಬಕಾರಿ ನಿರೀಕ್ಷಕ, ಅಬಕಾರಿ ಉಪ ಅಧೀಕ್ಷಕ, ಅಬಕಾರಿ ಅಧೀಕ್ಷಕ, ಅಬಕಾರಿ ಉಪ ಆಯುಕ್ತ, ಅಬಕಾರಿ ಜಂಟಿ ಆಯುಕ್ತ ಮತ್ತು ಅಬಕಾರಿ ಅಪರ ಆಯುಕ್ತರ ಹುದ್ದೆಗಳನ್ನು ಒಗ್ಗೂಡಿಸಿ ಒಂದೇ ಮಾರ್ಗದಲ್ಲಿ ಕಾರ್ಯನಿರ್ವಹಿಸಲು (to work under one line of control) ಹಾಗೂ ಇಲಾಖೆಯ ಆಡಳಿತ ನಿರ್ವಹಣೆಯಲ್ಲಿ ಹಿರಿಯ ಅಧಿಕಾರಿಗಳಿಗೆ ಹೊಣೆಗಾರರಾಗಿಲು (accountable to senior officers) ಆದೇಶಿಸಿದೆ.

12. ಇಲಾಖೆಯಲ್ಲಿ ನೇರ ನಿಯಂತ್ರಣ (one line of control), ಹೊಂದಿ ಕಾರ್ಯ ನಿರ್ವಹಿಸಲು ಆದೇಶಿಸಿರುವುದರಿಂದ ಜಿಲ್ಲೆಯಲ್ಲಿನ ಜಾರಿ ಮತ್ತು ತನಿಖಾ ಕಾರ್ಯಗಳಿಗೆ ಸಂಬಂಧಿಸಿದಂತೆ ತಾಲ್ಲೂಕು ಮಟ್ಟದಿಂದ ಜಿಲ್ಲಾ ಮಟ್ಟದವರೆಗೆ ಜಿಲ್ಲೆಯ ಅಬಕಾರಿ ಉಪ ಆಯುಕ್ತರು ಸಂಪೂರ್ಣವಾಗಿ ಉತ್ತರದಾಯಿತ್ವ ಹೊಂದಿರುತ್ತಾರೆ. ಜಿಲ್ಲೆಯ ಅಬಕಾರಿ ಉಪ ಆಯುಕ್ತರಿಗೆ ಸದರಿ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುವ ಅಬಕಾರಿ ಅಧೀಕ್ಷಕರು, ಅಬಕಾರಿ ಉಪ ಅಧೀಕ್ಷಕರು, ಅಬಕಾರಿ ನಿರೀಕ್ಷಕರು, ಅಬಕಾರಿ ಉಪ ನಿರೀಕ್ಷಕರುಗಳು ಮತ್ತು ಅಬಕಾರಿ ಹಿರಿಯ ರಕ್ಷಕರು/ರಕ್ಷಕರು ಹಾಗೂ ವಾಹನ ಚಾಲಕರುಗಳು ಜಾರಿ ಮತ್ತು ತನಿಖೆ ಕರ್ತವ್ಯ ಹಾಗೂ ರಾಜಸ್ವ ಸಂಗ್ರಹಣೆ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಉತ್ತರದಾಯಿಗಳಾಗಿರಲೂ ಸಹ ಆದೇಶಿಸಿದೆ.

13. ಮೇಲಿನಂತೆ ಅಬಕಾರಿ ಇಲಾಖೆಯ ಪುನರ್‌ರಚನೆಯ ಕಾರಣದಿಂದ ಒಟ್ಟಾರೆಯಾಗಿ ಅಗತ್ಯವಾದ ಹೊಸದಾಗಿ ಹುದ್ದೆಗಳನ್ನು ಸೃಜಿಸಲಾಗಿರುವ ವಿವರಗಳು ಈ ಕೆಳಗಿನಂತಿವೆ ಹಾಗೂ ಹೊಸದಾಗಿ ಸೃಜಿಸಲಾದ ಪೂರಕ ಹುದ್ದೆಗಳನ್ನು ಹೆಚ್ಚುವರಿ ಸಿಬ್ಬಂದಿಯು ಅಗತ್ಯವಿರುವ ವಿವಿಧ ಕಛೇರಿಗಳಿಗೆ ಅನುಬಂಧ– IIರಲ್ಲಿ ನಮೂದಿಸಲಾಗಿರುವಂತೆ ಹಂಚಿಕೆ ಮಾಡಲಾಗಿದೆಃ

| ಕ್ರ. ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ಸೃಜಿಸಲು ಪ್ರಸ್ತಾಪಿಸಿರುವ ಹುದ್ದೆಗಳ ಸಂಖ್ಯೆ |
|---|---|---|
| 1. | ಅಪರ ಅಬಕಾರಿ ಆಯುಕ್ತರು<br>ವೇತನ ಶ್ರೇಣಿ ರೂ.26250–36500 | 2 |
| 2. | ಅಬಕಾರಿ ನಿರೀಕ್ಷಕರು<br>ವೇತನ ಶ್ರೇಣಿ ರೂ.10000–18150 | 88 |
| 3. | ಅಬಕಾರಿ ಉಪ ನಿರೀಕ್ಷಕರು<br>ವೇತನ ಶ್ರೇಣಿ ರೂ. 8000–14800 | 58 |

| ಕ್ರ. ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ಸೃಜಿಸಲು ಪ್ರಸ್ತಾಪಿಸಿರುವ ಹುದ್ದೆಗಳ ಸಂಖ್ಯೆ |
|---|---|---|
| 4. | ಹಿರಿಯ ಅಬಕಾರಿ ರಕ್ಷಕರು<br>ವೇತನ ಶ್ರೇಣಿ ರೂ. 6250–12000 | 09 |
| 5. | ಅಬಕಾರಿ ರಕ್ಷಕರು<br>ವೇತನ ಶ್ರೇಣಿರೂ.5800–10500 | 62 |
| 6. | ಶೀಘ್ರಲಿಪಿಗಾರರು<br>ವೇತನ ಶ್ರೇಣಿ ರೂ. 7275–13350 | 07 |
| 7. | ದ್ವಿತೀಯ ದರ್ಜೆ ಸಹಾಯಕರು<br>ವೇತನ ಶ್ರೇಣಿ ರೂ.5800–10500 | 39 |
| 8. | ವಾಹನ ಚಾಲಕರು<br>ವೇತನ ಶ್ರೇಣಿ ರೂ.5800–10500 | 224 |
| | **ಒಟ್ಟು** | **489** |

14. ಇಲಾಖೆಯಲ್ಲಿ ಅಪರ ಅಬಕಾರಿ ಆಯುಕ್ತರು, ಅಬಕಾರಿ ಜಂಟಿ ಆಯುಕ್ತರು ಮತ್ತು ಇತರ ಅಧಿಕಾರಿಗಳು ಮತ್ತು ನೌಕರರುಗಳು ಜವಾಬ್ದಾರಿಯುತವಾಗಿ ಕಾರ್ಯನಿರ್ವಹಿಸುವ ಉದ್ದೇಶದಿಂದ ಇಲಾಖೆಯ ಕಾರ್ಯನಿರ್ವಾಹಕ ಅಧಿಕಾರಿ/ನೌಕರರುಗಳಿಗೆ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಈ ಆದೇಶದ ಅನುಬಂಧ– IIIರಲ್ಲಿ ನಿಗದಿಪಡಿಸಿ ಆದೇಶಿಸಿದೆ.

15. ಇಲಾಖೆಯು ಪುನರ್‌ರಚನೆಗೊಂಡು ತಾಲ್ಲೂಕು ಜಾರಿ ಮತ್ತು ತನಿಖೆ ಕಛೇರಿಯನ್ನು ಅಲ್ಲಿನ ಸಿಬ್ಬಂದಿಯೊಂದಿಗೆ ತಾಲ್ಲೂಕು ವಲಯ ಕಛೇರಿಯಲ್ಲಿ ವಿಲೀನಗೊಳಿಸಿದ ನಂತರ ಇಲಾಖೆಯ ಪುನರ್‌ರಚನೆ ಪೂರ್ವದಲ್ಲಿ ಜಾರಿ ಮತ್ತು ತನಿಖೆ ಕಛೇರಿಯ ಸಿಬ್ಬಂದಿಯ ವೇತನ ಮತ್ತು ಭತ್ಯ ಹಾಗೂ ಡಿ.ಸಿ.ಬಿಲ್ಲಿನಲ್ಲಿ ಸೆಳೆಯುವ ಮೊತ್ತಗಳನ್ನು ಉಪ ವಿಭಾಗದ ಅಬಕಾರಿ ಉಪ ಅಧೀಕ್ಷಕರಿಗೆ ನೀಡಲಾಗಿದ್ದ ಅಧಿಕಾರವನ್ನು ಹಿಂತೆಗೆದುಕೊಂಡು ಈ ಅಧಿಕಾರವನ್ನು ಸಂಬಂಧಪಟ್ಟ ತಾಲ್ಲೂಕು ವಲಯ ಕಛೇರಿಯ ಅಬಕಾರಿ ನಿರೀಕ್ಷಕರಿಗೆ ನೀಡಲಾಗಿದೆ. ಆದರೆ, ಉಪ ವಿಭಾಗದ ಅಬಕಾರಿ ಉಪ ಅಧೀಕ್ಷಕರು ಉಪ ವಿಭಾಗ ಕಛೇರಿಯಲ್ಲಿ ಕಾರ್ಯನಿರ್ವಹಿಸುವ ಸಿಬ್ಬಂದಿಯ ವೇತನ ಮತ್ತು ಭತ್ಯ ಹಾಗೂ ಈ ಕಛೇರಿಗೆ ಸಂಬಂಧಿಸಿದ ಡಿ.ಸಿ.ಬಿಲ್ಲಿನಲ್ಲಿ ಸೆಳೆಯುವ ಮೊತ್ತಗಳ ಅಧಿಕಾರವನ್ನು ಮುಂದುವರೆಸಲಾಗಿದೆ.

16. ಇಲಾಖೆಯನ್ನು ಮರುವಿನ್ಯಾಸಗೊಳಿಸುವ ಸಂಬಂಧ ಒಂದು ಜಾಗದಿಂದ ಇನ್ನೊಂದು ಜಾಗಕ್ಕೆ ಹುದ್ದೆಗಳನ್ನು ಸ್ಥಳಾಂತರಿಸಿರುವ ಪ್ರಕರಣಗಳಲ್ಲಿ ಸದರಿ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿಯೊಂದಿಗೆ ಸ್ಥಳಾಂತರಿಸಿ ಆದೇಶಿಸಲಾಗಿದೆ.

17. ಇಲಾಖೆಯನ್ನು ಮರುವಿನ್ಯಾಸ ಮಾಡುವ ಸಂಬಂಧ ವಾರ್ಷಿಕ ಸುಮಾರು ರೂ. 6,57,40,000–00 (ಲಕ್ಷಗಳಲ್ಲಿ)ಗಳ ಅವರ್ತಕ ವೆಚ್ಚ ಮತ್ತು ರೂ.2,57,40,000–00 ಅನಾವರ್ತಕ ವೆಚ್ಚ ಬರಲ್ಲಿದ್ದು, ಈ ಅಧಿಕ ಆರ್ಥಿಕ ಹೊರೆಯನ್ನು 2008–09ನೇ ಸಾಲಿಗೆ ಅಬಕಾರಿ ಇಲಾಖೆಗೆಂದು ಸಂಬಂಧಪಟ್ಟ ಲೆಕ್ಕ ಶೀರ್ಷಿಕೆಯಲ್ಲಿ ಒದಗಿಸಲಾಗಿರುವ ಅನುದಾನದಿಂದ ಭರಿಸುವುದು.

18. ಈ ಆದೇಶವನ್ನು ಸಿಆಸುಇ (ಸಿಬ್ಬಂದಿ–1)ಯ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಃ ಸಿಆಸುಇ 241 ಸಿಶಾಸೇ 2001 ದಿನಾಂಕಃ 29–01–2008ರಲ್ಲಿ ಪಡೆದುಕೊಂಡು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಕೋದಂಡರಾಮ ಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ)

**G.O.FD/42/EPS/2007(1),Bangalore,Dated: 24th March 2008**

**ANNEXURE-I**

**Re-deployment of posts of Superintendent of Excise in District E.I.B.`s**

| Sl. No. | Name of the District E.I.B. | Post shifted to O/o the Deputy Commissioner of Excise | No. of posts proposed to be shifted |
|---|---|---|---|
| 1 | 2 | 3 | 4 |
| 1 | Bangalore E.I.B-I Jayanagar | Continued | - |
| 2 | Bangalore E.I.B-2 Vijayanagar | Continued | - |

| | | | |
|---|---|---|---|
| 3 | Bangalore E.I.B-3 Yeshwanthpur | Continued | - |
| 4 | Bangalore E.I.B-4 Indiranagar | Continued | - |
| 5 | Bangalore Rural E.I.B. | K.S.B.C.L. Depot, Platform Road, Bangalore | 1 |
| 6 | Bagalkote E.I.B. | K.S.B.C.L. Depot, Belgaum | 1 |
| 7 | Belgaum E.I.B. | O/o J.C.E. E&I, Belgaum | 1 |
| 8 | Bellary E.I.B. | O/o J.C.E. E&I, Hospet | 1 |
| 9 | Bidar E.I.B. | K.S.B.C.L. Depot, Bellary Road, Hebbal, Bangalore | 1 |
| 10 | Bijapur E.I.B. | K.S.B.C.L. Depot, Bannerghatta Road, Bangalore | 1 |
| 11 | Chickmagalur E.I.B. | K.S.B.C.L. Depot, Kadugondanahalli, Bangalore North Taluk | 1 |
| 12 | Chitradurga E.I.B. | K.S.B.C.L. Depot, Whitefield, Bangalore | 1 |
| 13 | Dakshina Kannada E.I.B. | O/o J.C.E. E&I, Mangalore | 1 |
| 14 | Davanagere E.I.B. | O/o J.C.E. E&I, Bangalore | 1 |
| 15 | Dharwad E.I.B. | K.S.B.C.L. Depot, Peenya Industrial Area, Bangalore | 1 |
| 16 | Gadag E.I.B. | K.S.B.C.L. Depot, Tumkur Road, Bangalore | 1 |
| 17 | Gulburga E.I.B. | O/o J.C.E. E&I, Gulburga | 1 |
| 18 | Hassan E.I.B. | State E.I.B. (North) | 1 |
| 19 | Kodagu E.I.B. | O/o E.C. Bangalore | 1 |
| 20 | Kolar E.I.B. | K.S.B.C.L. Depot, Yeshwantpur, Bangalore | 1 |
| 21 | Mandya E.I.B. | K.S.B.C.L. Depot, Mysore | 1 |
| 22 | Mysore E.I.B. | O/o J.C.E. E&I, Mysore | 1 |
| 23 | Raichur E.I.B | K.S.B.C.L. Depot, Gulburga | 1 |
| 24 | Shimoga E.I.B. | O/o E.C.Bangalore | 1 |
| 25 | Tumkur E.I.B. | K.S.B.C.L. Depot, Mysore Road, Bangalore | 1 |
| 26 | Udupi E.I.B. | K.S.B.C.L. Depot, Mangalore | 1 |
| 27 | Uttara Kannada E.I.B. | O/o E.C., Bangalore | 1 |

**B. Kodandarama Gowda**
Under Secretary to Government,
Finance Department (Excise)

**G.O.FD/42/EPS/2007(1),Bangalore,Dated: 24th March 2008**

**ANNEXURE-I(A)**

**Re-deployment of posts of I.E, S.I.E, Excise Head Guard and Excise Guard sanctioned in District E.I.B.`s**

| Sl No. | Name of the District E.I.B. | Post shifted to O/o the Deputy Commissioner of Excise | No. of posts proposed to be shifted | | | | |
|---|---|---|---|---|---|---|---|
| | | | I.E | SIE | EHG | EG | Driver |
| 1 | 2 | 3 | 4 | 5 | 6 | 7 | 8 |
| 1 | Bangalore Rural E.I.B. | Bangalore Rural District | 1 | 1 | 1 | 2 | 1 |

| Sl No. | Name of the District E.I.B. | Post shifted to O/o the Deputy Commissioner of Excise | No. of posts proposed to be shifted | | | | |
|---|---|---|---|---|---|---|---|
| | | | I.E | SIE | EHG | EG | Driver |
| 2 | Bagalkote E.I.B. | Bagalkote Dist. | 1 | 1 | 1 | 2 | 1 |
| 3 | Belgaum E.I.B. | Belgaum Dist. | 1 | 1 | 1 | 2 | 1 |
| 4 | Bellary E.I.B. | Bellary Dist. | 1 | 1 | 1 | 2 | 1 |
| 5 | Bidar E.I.B. | Bidar Dist. | 1 | 1 | 1 | 2 | 1 |
| 6 | Bijapur E.I.B. | Bijapur Dist. | 1 | 1 | 1 | 2 | 1 |
| 7 | Chickmagalur E.I.B. | Chickmagalur Dist. | 1 | 1 | 1 | 2 | 1 |
| 8 | Chitradurga E.I.B. | Chitradurga Dist. | 1 | 1 | 1 | 2 | 1 |
| 9 | Dakshina Kannada E.I.B. | Dakshina Kannada Dist. | 1 | 1 | 1 | 2 | 1 |
| 10 | Davanagere E.I.B. | Davanagere Dist. | 1 | 1 | 1 | 2 | 1 |
| 11 | Dharwad E.I.B. | Dharwad Dist. | 1 | 1 | 1 | 2 | 1 |
| 12 | Gadag E.I.B. | Gadag Dist. | 1 | 1 | 1 | 2 | 1 |
| 13 | Gulburga E.I.B. | Gulburga Dist. | 1 | 1 | 1 | 2 | 1 |
| 14 | Hassan E.I.B. | Hassan Dist. | 1 | 1 | 1 | 2 | 1 |
| 15 | Kodagu E.I.B. | Kodagu Dist. | 1 | 1 | 1 | 2 | 1 |
| 16 | Kolar E.I.B. | Kolar Dist. | 1 | 1 | 1 | 2 | 1 |
| 17 | Mandya E.I.B. | Mandya Dist. | 1 | 1 | 1 | 2 | 1 |
| 18 | Mysore E.I.B. | Mysore Dist. | 1 | 1 | 1 | 2 | 1 |
| 19 | Raichur E.I.B | Raichur Dist. | 1 | 1 | 1 | 2 | 1 |
| 20 | Shimoga E.I.B. | Shimoga Dist. | 1 | 1 | 1 | 2 | 1 |
| 21 | Tumkur E.I.B. | Tumkur Dist. | 1 | 1 | 1 | 2 | 1 |
| 22 | Udupi E.I.B. | Udupi Dist. | - | 1 | 1 | 2 | 1 |
| 23 | Uttara Kannada E.I.B. | Uttara Kannada Dist. | 1 | 1 | 1 | 2 | 1 |

**B. Kodandarama Gowda**
Under Secretary to Government,
Finance Department (Excise)

**G.O.FD/42/EPS/2007(1),Bangalore,Dated: 24th March 2008**

**ANNEXURE-I (B)**

**Re-deployment of posts of F.D.A., S.D.A. and Typist cum Computer operator, sanctioned in District E.I.B.`s**

| Sl. No. | Name of the District E.I.B. | Post shifted to O/o the Deputy Commissioner of Excise | No. of posts proposed to be shifted | | |
|---|---|---|---|---|---|
| | | | F.D.A | S.D.A. | Typist Cum Computer Operator |
| 1 | 2 | 3 | 4 | 5 | 6 |
| 1 | Bangalore Rural E.I.B. | Bangalore Rural District | 1 | 1 | 1 |
| 2 | Bagalkote E.I.B. | Bagalkote Dist. | 1 | 1 | 1 |
| 3 | Belgaum E.I.B. | Belgaum Dist. | 1 | 1 | 1 |
| 4 | Bellary E.I.B. | Bellary Dist. | 1 | 1 | 1 |
| 5 | Bidar E.I.B. | Bidar Dist. | 1 | 1 | 1 |
| 6 | Bijapur E.I.B. | Bijapur Dist. | 1 | 1 | 1 |

| 1 | 2 | 3 | 4 | 5 | 6 |
|---|---|---|---|---|---|
| 7 | Chickmagalur E.I.B. | Chickmagalur Dist. | 1 | 1 | 1 |
| 8 | Chitradurga E.I.B. | Chitradurga Dist. | 1 | 1 | 1 |
| 9 | Dakshina Kannada E.I.B. | Dakshina Kannada Dist. | 1 | 1 | 1 |
| 10 | Davanagere E.I.B. | Davanagere Dist. | 1 | 1 | 1 |
| 11 | Dharwad E.I.B. | Dharwad Dist. | 1 | 1 | 1 |
| 12 | Gadag E.I.B. | Gadag Dist. | 1 | 1 | 1 |
| 13 | Gulburga E.I.B. | Gulburga Dist. | 1 | 1 | 1 |
| 14 | Hassan E.I.B. | Hassan Dist. | 1 | 1 | 1 |
| 15 | Kodagu E.I.B. | Kodagu Dist. | 1 | 1 | 1 |
| 16 | Kolar E.I.B. | Kolar Dist. | 1 | 1 | 1 |
| 17 | Mandya E.I.B. | Mandya Dist. | 1 | 1 | 1 |
| 18 | Mysore E.I.B. | Mysore Dist. | 1 | 1 | 1 |
| 19 | Raichur E.I.B | Raichur Dist. | 1 | 1 | 1 |
| 20 | Shimoga E.I.B. | Shimoga Dist. | 1 | 1 | 1 |
| 21 | Tumkur E.I.B. | Tumkur Dist. | 1 | 1 | 1 |
| 22 | Udupi E.I.B. | Udupi Dist. | 1 | 1 | 1 |
| 23 | Uttara Kannada E.I.B. | Uttara Kannada Dist. | 1 | 1 | 1 |

**B. Kodandarama Gowda**
Under Secretary to Government,
Finance Department (Excise)

**G.O.FD/42/EPS/2007(1),Bangalore,Dated: 24th March 2008**

**ANNEXURE-I (C)**

**Re-deployment of post of Sub-Inspector of Excise sanctioned in District E.I.B.`s**

| Sl. No | Name of the District E.I.B. | Post shifted to O/o the Deputy Superintendent of Excise, Sub-Division | No. of posts proposed to be shifted |
|---|---|---|---|
| 1. | Bangalore Rural E.I.B. | Hoskote Sub-division | 1 |
| 2. | Bagalkote E.I.B. | Bagalkote Sub-division | 1 |
| 3. | Belgaum E.I.B. | Belgaum Sub-division | 1 |
| 4. | Bellary E.I.B. | Bellary Sub-division | 1 |
| 5. | Bidar E.I.B. | Bidar Sub-division | |
| 6. | Bijapur E.I.B. | Bijapur Sub-division | 1 |
| 7. | Chickmagalur E.I.B. | Chickmagalur Sub-division | 1 |
| 8. | Chitradurga E.I.B. | Chitradurga Sub-division | 1 |
| 9. | Dakshina Kannada E.I.B. | Mangalore Sub-division-1 | 1 |
| 10. | Davanagere E.I.B. | Davanagere Sub-division | 1 |
| 11. | Dharwad E.I.B. | Dharwad Sub-division | 1 |
| 12. | Gadag E.I.B | Gadag Sub-division | 1 |
| 13. | Gulburga E.I.B. | Gulburga Sub-division | 1 |
| 14. | Hassan E.I.B. | Hassan Sub-division | 1 |
| 15. | Kodagu E.I.B. | Somwarpet Sub-division | 1 |
| 16. | Kolar E.I.B. | K.G.F.Sub-division | 1 |
| 17. | Mandya E.I.B. | Mandya Sub-division | 1 |
| 18. | Mysore E.I.B. | Mysore Sub-division | 1 |
| 19. | Raichur E.I.B | Raichur Sub-division | 1 |

| 1 | 2 | 3 | 4 |
|---|---|---|---|
| 20. | Shimoga E.I.B. | Shimoga Sub-division | 1 |
| 21. | Tumkur E.I.B | Tumkur sub-Division | 1 |
| 22. | Uttara Kannada E.I.B. | Karwar Sub-division | 1 |

**B. Kodandarama Gowda**
Under Secretary to Government,
Finance Department (Excise)

**G.O.FD/42/EPS/2007(1),Bangalore,Dated: 24th March 2008**

**ANNEXURE-I (D)**

**Re-deployment of posts of Second Division Assistant Sanctioned to District E.I.B.s**

| Sl. No. | Name of the District E.I.B. | Post shifted to | No. of posts proposed to be shifted |
|---|---|---|---|
| 1 | 2 | 3 | 4 |
| 1 | Bangalore Rural E.I.B. | O/o DYSE, Ramanagar Sub-Division | 1 |
| 2 | Bagalkote E.I.B. | O/o I.E. Bilagi Range | 1 |
| 3 | Belgaum E.I.B. | O/o of J.C.E. E&I, Belgaum Division | 1 |
| 4 | Bellary E.I.B. | O/o J.C.E. E&I, Hospet Division | 1 |
| 5 | Bidar E.I.B. | O/o I.E. Siruguppa Range, Bellary Dist. | 1 |
| 6 | Bijapur E.I.B. | O/o I.E. Kudligi Range, Bellary Dist. | 1 |
| 7 | Chickamagalur E.I.B. | O/o I.E. Koppa Range | 1 |
| 8 | Chitradurga E.I.B. | O/o I.E. Hosadurga Range | 1 |
| 9 | Dakshina Kannada E.I.B. | O/o I.E. Puttur Range | 1 |
| 10 | Davanagere E.I.B. | O/o I.E. Honnali Range | 1 |
| 11 | Dharwad E.I.B. | O/o I.E. Kalghatgi Range | 1 |
| 12 | Gadag E.I.B. | O/o I.E. Mundargi Range | 1 |
| 13 | Gulburga E.I.B. | O/o J.C.E. E&I, Gulburga Division | 1 |
| 14 | Hassan E.I.B. | O/o I.E. Hassan Range 2, Hassan | 1 |
| 15 | Kodagu E.I.B. | O/o DYSE, Madikeri Sub-Division | 1 |
| 16 | Kolar E.I.B. | O/o I.E. Bagepalli Range | 1 |
| 17 | Mandya E.I.B. | O/o J.C.E. E&I, Mysore Division | 1 |
| 18 | Mysore E.I.B. | O/o I.E. Mysore Range No.3 | 1 |
| 19 | Raichur E.I.B | O/o I.E. Lingasugur Range | 1 |
| 20 | Shimoga E.I.B. | O/o I.E. Hosanagar Range | 1 |
| 21 | Tumkur E.I.B. | O/o I.E. Chikkanayakanahalli Range | 1 |
| 22 | Udupi E.I.B. | O/o DYSE, Kundapur Sub-Division | 1 |
| 23 | Uttara Kannada E.I.B. | O/o I.E. Karwar Range | 1 |

**B. Kodandarama Gowda**
Under Secretary to Government,
Finance Department (Excise)

**G.O.FD/42/EPS/2007(1),Bangalore,Dated:24th March 2008**

**ANNEXURE-I(E)**

**Re-deployment of posts of Drivers**

| Sl. No. | Name of the District E.I.B. | Post shifted to O/o the Deputy Commissioner of Excise | No. of posts proposed to be shifted |
|---|---|---|---|
| 1 | Bangalore Rural E.I.B. | O/o D.C.E. Bangalore West | 1 |

| 1 | 2 | 3 | 4 |
|---|---|---|---|
| 2 | Bagalkote E.I.B. | O/o D.C.E. Koppal | 1 |
| 3 | Belgaum E.I.B. | O/o J.C.E. E&I, Belgaum Division | 1 |
| 4 | Bellary E.I.B. | O/o J.C.E. E&I, Hospet Division | 1 |
| 5 | Bidar E.I.B. | O/o J.C.E. E&.I. Hospet Division. | 1 |
| 6 | Bijapur E.I.B. | O/o DYSE, Mangalore No.2 Sub-Division | 1 |
| 7 | Chickamagalur E.I.B. | O/o DYSE, Anekal Sub-Division | 1 |
| 8 | Chitradurga E.I.B. | O/o DySE, Hiriyur Sub-Division | 1 |
| 9 | Dakshina Kannada E.I.B. | O/o J.C.E. E&I, Mangalore Division | 1 |
| 10 | Davanagere E.I.B. | O/o J.C.E. E&I, Bangalore Division, Bangalore | 1 |
| 11 | Dharwad E.I.B. | O/o D.C.E. Bangalore North | 1 |
| 12 | Gadag E.I.B. | O/o D.C.E., Haveri | 1 |
| 13 | Gulburga E.I.B. | O/o J.C.E. E&I, Gulburga Division | 1 |
| 14 | Hassan E.I.B. | O/o E.C., Bangalore | 1 |
| 15 | Kodagu E.I.B. | O/o DYSE, Madikeri Sub-Division | 1 |
| 16 | Kolar E.I.B. | O/o DYSE, Kolar Sub-Division | 1 |
| 17 | Mandya E.I.B. | O/o D.C.E. Bangalore North | 1 |
| 18 | Mysore E.I.B. | O/o J.C.E. E&I, Mysore | 1 |
| 19 | Raichur E.I.B | O/o D.C.E. Chamarajnagar | 1 |
| 20 | Shimoga E.I.B. | O/o E.C.Bangalore | 1 |
| 21 | Tumkur E.I.B. | O/o D.C.E. Bangalore West | 1 |
| 22 | Udupi E.I.B. | O/o DYSE, Kundapur Sub-Division | 1 |
| 23 | Uttara Kannada E.I.B. | O/o E.C., Bangalore | 1 |

**B. Kodandarama Gowda**
Under Secretary to Government,
Finance Department (Excise)

**G.O.FD/42/EPS/2007(1),Bangalore,Dated: 24th March 2008**

**ANNEXURE-I(F)**

**Re-deployment of the post of Deputy Superintendent of Excise**

| Sl. No. | Name of the K.S.B.C.L. Depot and Distillery | Post to be shifted to | No. of post |
|---|---|---|---|
| 1 | 2 | 3 | 4 |
| 1 | K.S.B.C.L.Depot, Mysore Road, Bangalore | Anekal Sub-division, Bangalore Urban | 1 |
| 2 | K.S.B.C.L.Depot, Platform Road, Bangalore | Mangalore No.2 Sub-division, D.K.Dist. | 1 |
| 3 | K.S.B.C.L.Depot, Peenya Industrial Area, Bangalore | Madikeri Sub-division, Kodagu | 1 |
| 4 | K.S.B.C.L.Depot, Badami Road, Bagalkote | Kolar Sub-division, Kolar | 1 |
| 5 | K.S.B.C.L.Depot, Bangalore Road, Bellary | Kundapur Sub-division, Udupi | 1 |
| 6 | K.S.B.C.L.Depot, Belgaum | O/o D.C.E. Bangalore North, Bangalore Urban Dist | 1 |

| 1 | 2 | 3 | 4 |
|---|---|---|---|
| 7 | K.S.B.C.L.Depot, Bijapur | O/o D.C.E. Bangalore West, Bangalore Urban Dist | 1 |
| 8 | K.S.B.C.L.Depot, Chitradurga | Hiriyur Sub-division, Chitradurga | 1 |
| 9 | K.S.B.C.L.Depot, Chamarajanagar | O/o Excise Commissioner, Bangalore | 1 |
| 10 | K.S.B.C.L.Depot, Chickmagalur | O/o Excise Commissioner, Bangalore | 1 |
| 11 | K.S.B.C.L.Depot, Davanagere | O/o Excise Commissioner, Bangalore | 1 |

**B. Kodandarama Gowda**
Under Secretary to Government,
Finance Department (Excise)

**G.O.FD/42/EPS/2007(1),Bangalore,Dated: 24th March 2008**

**ANNEXURE-I(G)**

**Re-deployment of Ranges**

| Sl. No. | Name of the Range | Post to be shifted to | No. of posts proposed to be shifted | | | | |
|---|---|---|---|---|---|---|---|
| | | | I.E. | S.I.E | S.D.A | Excise Head Guard | Excise Guard |
| 1 | 2 | 3 | 4 | 5 | 6 | 7 | 8 |
| 1 | Deodurga Range | Bellary Range No.2 | 1 | 2 | 1 | 1 | 7 |
| 2 | Yelbuga Range | Hospet Range No.2 | 1 | 2 | 1 | 1 | 7 |
| 3 | Jagalur Range | Davanagere Range No.2 | 1 | 2 | 1 | 1 | 7 |
| 4 | Afzalpur Range | Gulburga Range No.2 | 1 | 2 | 1 | 1 | 7 |
| 5 | Alur Range | Hassan Range No.2 | 1 | 2 | 1 | 1 | 7 |
| 6 | Gudibande Range | Shimoga No.2 | 1 | 2 | 1 | 1 | 7 |
| 7 | Yelandur Range | Mysore Range No.III | 1 | 2 | 1 | 1 | 7 |
| 8 | Pandavapura Range | Mysore Range No.IV | 1 | 2 | 1 | 1 | 7 |
| 9 | Supa Range | Mangalore South Range II | 1 | 2 | 1 | 1 | 7 |
| 10 | Mundagod Range | Mangalore North Range II | 1 | 2 | 1 | 1 | 7 |
| 11 | Siddapur Range | Mangalore East Range II | 1 | 2 | 1 | 1 | 7 |
| 12 | Sringeri Range | Udupi Range II | 1 | 2 | 1 | 1 | 7 |

**B. Kodandarama Gowda**
Under Secretary to Government,
Finance Department (Excise)

**G.O.FD/42/EPS/2007(1),Bangalore,Dated:24th March 2008**

**ANNEXURE-I(H)**

**Re-deployment of posts of Excise Guard sanctioned in District E.I.B.`s and K.S.B.C.L Depots**

| Sl. No. | Name of the K.S.B.C.L. Depot and District E.I.B.`s | Post to be shifted to | No. of post |
|---|---|---|---|
| 1 | 2 | 3 | 4 |
| 1 | K.S.B.C.L.Depot, Mysore Road, Bangalore-26 | K.S.B.C.L.Depot, Yeshwanthpur, Bangalore(U) | 1 |
| 2 | K.S.B.C.L.Depot, Platform Road, Bangalore-20 | K.S.B.C.L.Depot, Kadugondanahalli, Bangalore(U) | 1 |

| 1 | 2 | 3 | 4 |
|---|---|---|---|
| 3 | K.S.B.C.L.Depot, Engarsal Bond Road, Bangalore-58 | K.S.B.C.L.Depot, Hebbala, Bangalore(U) | 1 |
| 4 | K.S.B.C.L.Depot, A.P.M.C. Cotton Market, Bellary District | K.S.B.C.L.Depot, Hospet, Bellary | 1 |
| 5 | K.S.B.C.L.Depot, A.P.M.C. Market yard, Belgaum District. | K.S.B.C.L.Depot, Gokak, Belgaum Dist. | 1 |
| 6 | K.S.B.C.L.Depot, A.P.M.C. yard,Bijapur. | K.S.B.C.L.Depot, Bannerghatta Road, Bangalore(U) | 1 |
| 7 | K.S.B.C.L.Depot, Kolar Road, Bangarpet-563114. | K.S.B.C.L.Depot,Chintamani, Chickaballapur District | 1 |
| 8 | K.S.B.C.L.Depot, Jyothinagar, Chickmagalur. | K.S.B.C.L.Depot,Whitefiled, Bangalore(U) | 1 |
| 9 | K.S.B.C.L.Depot, P.B.Road, Davanagere. | K.S.B.C.L.Depot, Tumkur Road, Bangalore (U) | 1 |
| 10 | K.S.B.C.L.Depot, Mylur, Bidar District | K.S.B.C.L.Depot, Devanahalli, Bangalore Rural | 1 |
| 11 | K.S.B.C.L.Depot, Nehru Ganj, Gulbarga | K.S.B.C.L.Depot, Yadgir, Gulbarga District | 1 |
| 12 | K.S.B.C.L.Depot, Godown No. 6A, 7A and 8A, B.M.Road, A.P.M.C. yard Hassan | K.S.B.C.L.Depot, Channapatna, Ramnagar District | 1 |
| 13 | K.S.B.C.L.Depot, Srinagar Cross, Hubli | K.S.B.C.L.Depot, Hoskote, Bangalore Rural | 1 |
| 14 | K.S.B.C.L.Depot, B.M.Road, Kushalnagar. | K.S.B.C.L.Depot, Virajpet, Kodagu District | 1 |
| 15 | K.S.B.C.L.Depot, Mysore- Mandya Road, Mandya | K.S.B.C.L.Depot, Hebbala II, Mysore District | 1 |
| 16 | K.S.B.C.L.Depot, Maroli, Mangalore | K.S.B.C.L.Depot, Puttur, D.K.District | 1 |
| 17 | K.S.B.C.L.Depot, Bannimantap Layout, Mysore | K.S.B.C.L.Depot, Hunsur, Mysore District | 1 |
| 18 | K.S.B.C.L.Depot, Rajendra ganj, Raichur. | K.S.B.C.L.Depot,Sindhanoor, Raichur District | 1 |
| 19 | K.S.B.C.L.Depot,Sagar Road , Shimoga | K.S.B.C.L.Depot, Sakalwar II, Anekal Tq, Bangalore (U) | 1 |
| 20 | K.S.B.C.L.Depot, A.P.M.C.Yard Sirsi | K.S.B.C.L.Depot, Honnavara, U.K.District | 1 |
| 21 | K.S.B.C.L.Depot, B.H.Road, Tumkur. | K.S.B.C.L.Depot, Sira, Tumkur District | 1 |
| 22 | K.S.B.C.L.Depot, Manipal, Udupi | K.S.B.C.L.Depot, Kundapur, Udupi District | 1 |
| 23 | K.S.B.C.L.Depot,Gutthal Road, Haveri | K.S.B.C.L.Depot, Siddlaghatta, Chickaballalpur District | 1 |
| 24 | K.S.B.C.L.Depot, Badami Road, Bagalkot | K.S.B.C.L.Depot, Jamkhandi, Bagalkote District | 1 |

